<u>**ಕರ್ನಾಟಕ ವಿಧಾನ ಪರಿಷತ್ತು**</u>

| | | |
|---|---|---|
| ಮಾನ್ಯ ಸದಸ್ಯರ ಹೆಸರು | : | ಶ್ರೀ ಶಶಿಲ್ ಜಿ.ನಮೋಶಿ (ಶಿಕ್ಷಕರ ಕ್ಷೇತ್ರ) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | **1278** |
| ಉತ್ತರಿಸಬೇಕಾದ ದಿನಾಂಕ | : | 22.09.2021 |
| ಉತ್ತರಿಸಬೇಕಾದ ಸಚಿವರು | : | ವಸತಿ ಮತ್ತು ಮೂಲಸೌಲಭ್ಯ ಅಭಿವೃದ್ಧಿ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಕಲಬುರಗಿ ಜಿಲ್ಲೆಯಲ್ಲಿ ಪಂಚಾಯಿತಿ ವತಿಯಿಂದ ವಾಜಪೇಯಿ ವಸತಿ ಯೋಜನೆಯಡಿ ಬಡವರಿಗಾಗಿ ಮನೆ ವಿತರಿಸಲು ಎಷ್ಟು ಎಕರೆ ಭೂಮಿ ಖರೀದಿಸಲಾಗಿದೆ; ಹಾಗೂ ಯಾವಾಗ ಖರೀದಿಸಲಾಗಿದೆ; | ಅರ್ಹ ನಿವೇಶನ ರಹಿತ ಕುಟುಂಬಗಳಿಗೆ ನಿವೇಶನ ಹಂಚಿಕೆ ಮಾಡಲು ಗ್ರಾಮೀಣ ಪ್ರದೇಶದಲ್ಲಿ ಮುಖ್ಯ ಮಂತ್ರಿಗಳ ಗ್ರಾಮೀಣ ನಿವೇಶನ ಮತ್ತು ನಗರ ಪ್ರದೇಶದಲ್ಲಿ ಮುಖ್ಯ ಮಂತ್ರಿಗಳ ನಗರ ನಿವೇಶನ ಯೋಜನೆ ಜಾರಿಯಲ್ಲಿದ್ದು, ಈ ಯೋಜನೆಗಳಡಿ ಅರ್ಹ ಕುಟುಂಬಗಳಿಗೆ ನಿವೇಶನ ಹಂಚಿಕೆ ಮಾಡಲಾಗುತ್ತಿದೆ. ನಿವೇಶನ ಹಂಚಿಕೆ ಮಾಡಲು ಸರ್ಕಾರಿ ಜಮೀನಿಗೆ ಪ್ರಥಮ ಆದ್ಯತೆ ನೀಡಲಾಗಿದ್ದು, ಸರ್ಕಾರಿ ಜಮೀನು ಲಭ್ಯವಿಲ್ಲದ ಕಡೆಗಳಲ್ಲಿ ಮಾತ್ರ ಖಾಸಗಿ ಜಮೀನು ಖರೀದಿಸಲು ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಜಿಲ್ಲಾ ಜಮೀನು ಖರೀದಿ ಸಮಿತಿಯನ್ನು ರಚಿಸಲಾಗಿದೆ. |
| (ಆ) | ಈ ವಸತಿ ಯೋಜನೆಗಾಗಿ ಸರ್ಕಾರದಿಂದ ಎಷ್ಟು ಹಣ ನಿಗದಿಪಡಿಸಲಾಗಿದೆ; | ಕಲಬುರಗಿ ಜಿಲ್ಲೆಯಲ್ಲಿ ಖಾಸಗಿ ಜಮೀನು ಖರೀದಿಗೆ 2002-03 ರಿಂದ 2021-2022 ನೇ ಸಾಲಿನವರೆಗೆ ಆಗಸ್ಟ 31 ರ ಅಂತ್ಯಕ್ಕೆ ಬಿಡುಗಡೆ ಮಾಡಲಾದ ಅನುದಾನದ ವಿವರ ಕೆಳಕಂಡಂತಿದೆ. (ರೂ.ಲಕ್ಷಗಳಲ್ಲಿ) |

| ಜಿಲ್ಲೆ | ಯೋಜನೆ | ವಿಸ್ತೀರ್ಣ (ಎ&ಸೆಂ) | ಬಿಡುಗಡೆ ಮಾಡಲಾದ ಅನುದಾನ |
|---|---|---|---|
| ಕಲಬುರಗಿ | ಗ್ರಾಮೀಣ ನಿವೇಶನ | 98.52 | 181.0738 |
| | ನಗರ ನಿವೇಶನ | 237.69 | 1416.509 |
| ಒಟ್ಟು | | 336.21 | 1597.583 |

ಸರ್ಕಾರದ ಆದೇಶ ಸಂಖ್ಯೆ: ವಇ 33 ಹೆಚ್‌ಎಹೆಚ್ 2016, ದಿನಾಂಕ: 12.07.2016 ಮತ್ತು 14.07.2017 ರಲ್ಲಿ ಜಮೀನು ಖರೀದಿ ದರಗಳನ್ನು ಈ ಕೆಳಕಂಡಂತೆ ನಿಗದಿಪಡಿಸಿ ಆದೇಶ ಹೊರಡಿಸಲಾಗಿದೆ.

(ರೂ.ಲಕ್ಷಗಳಲ್ಲಿ)

| ಪ್ರದೇಶ | ಗರಿಷ್ಟ ಮಿತಿ (ಪ್ರತಿ ಎಕರೆಗೆ) |
|---|---|
| ಗ್ರಾಮೀಣ ಪ್ರದೇಶ | ರೂ.9.00 |
| ಪಟ್ಟಣ ಪಂಚಾಯಿತಿ | ರೂ.12.00 |
| ಪುರಸಭೆ | ರೂ.15.00 |
| ನಗರಸಭೆ | ರೂ.22.50 |
| ಮಹಾನಗರ ಪಾಲಿಕೆ | ರೂ. 37.50 |
| ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | ರೂ. 75.00 |

(ಇ) ಈ ಯೋಜನೆಯಡಿ ಸದ್ಯ ಎಷ್ಟು ಮನೆಗಳನ್ನು ಕಟ್ಟಲಾಗಿದೆ; ಮತ್ತು ಇನ್ನು ಎಷ್ಟು ಮನೆಗಳನ್ನು ಕಟ್ಟುವ ಯೋಜನೆ ಇದೆ;

ಸರ್ಕಾರವು ಪ್ರತಿ ವರ್ಷ ಆಯವ್ಯಯದ
ನಿಗದಿಪಡಿಸುವ ಅನುದಾನಕ್ಕೆ ಅನುಗುಣವಾಗಿ ಗ್ರಾ
ಪಂಚಾಯತಿವಾರು/ ಸ್ಥಳೀಯ ಸಂಸ್ಥೆಗಳವಾರು ಮನೆಗಳ ಗು
ನಿಗಧಿಪಡಿಸಿ ಗ್ರಾಮಸಭೆ/ನಗರ ಆಶ್ರಯ ಸಮಿತಿಗಳ ಮೂಲ
ಅರ್ಹ ಫಲಾನುಭವಿಗಳನ್ನು ಆಯ್ಕೆ ಮಾಡಿ ವಸತಿ ಸೌಕರ
ಕಲ್ಪಿಸಿ ಕೊಡಲು ಕ್ರಮ ವಹಿಸಲಾಗುತ್ತಿದೆ.

ವಿವಿಧ ವಸತಿ ಯೋಜನೆಗಳಡಿ ಸ್ವಂತ ನಿವೇಶ
ಹೊಂದಿರುವ ಹಾಗೂ ಸರ್ಕಾರದಿಂದ ನಿವೇಶನ ಪಡೆ
ಫಲಾನುಭವಿಗಳನ್ನು ಒಳಗೊಂಡಂತೆ ಕಲಬುರಗಿ ಜಿಲ್ಲೆ
ಗ್ರಾಮೀಣ ಹಾಗೂ ನಗರ ಪ್ರದೇಶಗಳಲ್ಲಿ 2010-11 ರಿಂದ 202
22 ರ ಆಗಸ್ಟ್ 2021ರ ಅಂತ್ಯಕ್ಕೆ ರವರೆಗೆ ಒಟ್ಟು 1183
ಮನೆಗಳನ್ನು ಮಂಜೂರು ಮಾಡಲಾಗಿದೆ. ಜಿಲ್ಲಾವಾರು ವಿವ
ಈ ಕೆಳಕಂಡಂತಿದೆ.

| ಜಿಲ್ಲೆ | ಅನುಮೋದನೆ | ಪೂರ್ಣಗೊಂಡ ಮನೆಗಳು | ಪ್ರಗತಿಯಲ್ಲಿರುವ ಮನೆಗಳು | ಪ್ರಾರಂಭವಾಗಬೇಕಾದ ಮನೆಗಳು | ಬ್ಲಾಕ್ & ರದ್ದಾದ ಮನೆಗಳು |
|---|---|---|---|---|---|
| ಕಲಬುರಗಿ | 118334 | 78006 | 24869 | 1641 | 13818 |

(ಈ) ಇಲ್ಲಿಯವರೆಗೆ ಈ ಯೋಜನೆಗೆ ಜಾಗ ಮತ್ತು ಮನೆ ಕಟ್ಟಲು ಖರ್ಚು ಮಾಡಿದ ಹಣ ಎಷ್ಟು; (ವಿವರ ನೀಡುವುದು)

ಪ್ರಧಾನ ಮಂತ್ರಿ ಆವಾಸ್ ಯೋಜನೆ (ನಗರ)ದ ಎಹೆಚ್
ಘಟಕದಡಿ ಕಲಬುರಗಿ ಜಿಲ್ಲೆಯಲ್ಲಿ ಕರ್ನಾಟಕ ಕೊಳಗೇ
ಅಭಿವೃದ್ಧಿ ಮಂಡಳಿ ವತಿಯಿಂದ ಒಟ್ಟು ರೂ. 769.65 ಕೋಟಿಗ
ಮೊತ್ತದಲ್ಲಿ 12516 ಮನೆಗಳನ್ನು ನಿರ್ಮಿಸುವ 17 ಯೋಜನೆಗಳ
ಕೇಂದ್ರ ಸರ್ಕಾರದಿಂದ ಅನುಮೋದನೆ ಪಡೆಯಲಾಗಿದೆ.

(ಉ) ಮನೆ ಹಂಚಿಕೆ ಮಾಡಲು ಫಲಾನುಭವಿಗಳನ್ನು ಗುರುತಿಸಲಾಗಿದೆಯೇ; ಈ ಮೊದಲು ಸಿದ್ಧಪಡಿಸಿದ ಫಲಾನುಭವಿಗಳು ಪಟ್ಟಿಯಲ್ಲಿ ಬದಲಾವಣೆ ಏನಾದರೂ ಮಾಡಲಾಗಿದೆಯೇ; ಮತ್ತು ಹಕ್ಕುಪತ್ರ ವಿತರಣೆ ಮಾಡಲಾಗಿದೆಯೇ; (ವಿವರ ನೀಡುವುದು)

ರಾಜ್ಯಾದ್ಯಂತ ಸಾಮಾಜಿಕ, ಆರ್ಥಿಕವಾಗಿ ಹಿಂದುಳಿ
ವಸತಿರಹಿತ ಹಾಗೂ ನಿವೇಶನರಹಿತ ಕುಟುಂಬಗ
ಸಮೀಕ್ಷೆಯನ್ನು 2010-11 ನೇ ಸಾಲಿನಲ್ಲಿ ಗ್ರಾಮೀಣ ಪ್ರದೇಶದ
ನಡೆಸಲಾಗಿದ್ದು, ನಗರ ಪ್ರದೇಶಕ್ಕೆ ಸಂಬಂಧಪಟ್ಟಂತೆ 2017-18
ಸಾಲಿನಲ್ಲಿ ಬೇಡಿಕೆ ಸಮೀಕ್ಷೆಯನ್ನು ನಡೆಸಲಾಗಿದೆ. ಸಮೀ
ಪ್ರಕಾರ ಕಲಬುರಗಿ ಜಿಲ್ಲೆಯಲ್ಲಿ ಕಂಡು ಬಂದಿರು
ವಸತಿರಹಿತ/ನಿವೇಶನರಹಿತರ ವಿವರ ಕೆಳಕಂಡಂತಿದೆ.

| ಜಿಲ್ಲೆ | ವಸತಿ ರಹಿತರು | | ಒಟ್ಟು | ನಿವೇಶನ ರಹಿತರು | | ಒಟ |
|---|---|---|---|---|---|---|
| | ಗ್ರಾಮೀಣ | ನಗರ | | ಗ್ರಾಮೀಣ | ನಗರ | |
| ಕಲಬುರಗಿ | 160155 | 21047 | 181202 | 4547 | 32128 | 366 |

ಸಮೀಕ್ಷೆಯಲ್ಲಿರುವ ವಸತಿರಹಿತ/ನಿವೇಶನರಹಿತರನ
ಮಾತ್ರ ವಸತಿ/ನಿವೇಶನ ಯೋಜನೆಗಳಿಗೆ ಆಯ್ಕೆ ಮಾಡಲಾಗುತ್ತ
ವಸತಿ/ನಿವೇಶನ ಯೋಜನೆಗಳಡಿ ಸರ್ಕಾರ ನಿಗದಿಪಡಿಸಿದ ಗುರಿ
ಅನುಗುಣವಾಗಿ ಗ್ರಾಮಸಭೆ/ನಗರ ಆಶ್ರಯ ಸಮಿತಿ ಮೂಲ
ಫಲಾನುಭವಿಗಳನ್ನು ಆಯ್ಕೆ ಮಾಡಬೇಕಾಗಿರುತ್ತದೆ (ನಿವೇಶ
ಯೋಜನೆಗಳಡಿ ಗರಿಷ್ಟ ಗುರಿ ನಿಗಪಡಿಸಿರುವುದಿಲ್ಲ). ಒಂದ
ವೇಳೆ ಸದರಿ ಯೋಜನೆಗಳಡಿ ಆಯ್ಕೆಯಾದ ಫಲಾನುಭವಿಗ
ಪಟ್ಟಿಯಲ್ಲಿ ಅನರ್ಹರು ಕಂಡುಬಂದಲ್ಲಿ ನಗರ ಪ್ರದೇಶದ
ನಗರ ಆಶ್ರಯ ಸಮಿತಿ ಹಾಗೂ ಗ್ರಾಮೀಣ ಪ್ರದೇಶದಲ್ಲಿ ಜಾಗ್ರ

ಸಮಿತಿಗೆ ರದ್ದುಪಡಿಸಲು ಅವಕಾಶ ನೀಡಲಾಗಿದೆ. ಆದರೆ ಬದಲಿ ಫಲಾನುಭವಿಗಳನ್ನು ಅಥವಾ ಹೊಸದಾಗಿ ಫಲಾನುಭವಿಗಳನ್ನು ಸೇರಿಸಲು ಅಧಿಕಾರವಿರುವುದಿಲ್ಲ. ಅನರ್ಹರ ಬದಲಿಗೆ ಪುನ: ನಗರ ಆಶ್ರಯ ಸಮಿತಿ/ ಗ್ರಾಮಸಭೆಯಲ್ಲಿಯೇ ಅರ್ಹ ಫಲಾನುಭವಿಗಳನ್ನು ಹೊಸದಾಗಿ ಆಯ್ಕೆ ಮಾಡಬೇಕಾಗಿರುತ್ತದೆ.

ಗ್ರಾಮೀಣ ವಸತಿ/ನಿವೇಶನ ಯೋಜನೆಗಳಿಗೆ ಸಂಬಂದಪಟ್ಟಂತೆ ಸರ್ಕಾರವು ಹೊರಡಿಸಿರುವ ಆದೇಶ ಸಂಖ್ಯೆ: ವಇ 67 ಹೆಚ್‌ಎಹೆಚ್ 2015, ದಿನಾಂಕ:16.11.2015 ರ ಸಂಬಂಧ ಉಚ್ಚ ನ್ಯಾಯಾಲಯದಲ್ಲಿ ದಾವೆ ಹೂಡಲಾಗಿದ್ದು, ಘನ ನ್ಯಾಯಾಲಯವು ದಿನಾಂಕ:07.02.2017 ರಲ್ಲಿ ಜಾಗೃತಿ ಸಮಿತಿಯಲ್ಲಿ ಫಲಾನುಭವಿಗಳ ಅನುಮೋದನೆಗೆ ತಡೆಯಾಜ್ಞೆ ನೀಡಿ, ದಿನಾಂಕ:15.06.2017 ರಂದು ಮಧ್ಯಂತರ ತೀರ್ಪನ್ನು ಹೊರಡಿಸದ ಪ್ರಕಾರ ಗ್ರಾಮಸಭೆ ಮೂಲಕ ಆಯ್ಕೆಯಾದ ಫಲಾನುಭವಿಗಳ ಪಟ್ಟಿಯ ಮೇಲೆ ಕ್ರಮ ತೆಗೆದುಕೊಳ್ಳಲು ತಾಲ್ಲೂಕು ಪಂಚಾಯತಿಯ ಕಾರ್ಯನಿರ್ವಾಹಣಾಧಿಕಾರಿಗಳಿಗೆ ಅನುಮತಿ ನೀಡಲಾಗಿದ್ದು, ಅದರಂತೆ ಕ್ರಮವಹಿಸಲಾಗುತ್ತಿದೆ.

ಕಲಬುರಗಿ ಜಿಲ್ಲೆಯಲ್ಲಿ 2012-13 ರಿಂದ 2021-22 ರವರೆಗೆ ಗ್ರಾಮೀಣ ಪ್ರದೇಶದಲ್ಲಿ 549 ಹಾಗೂ ನಗರ ಪ್ರದೇಶದಲ್ಲಿ 3626 ನಿವೇಶನಗಳು ಒಟ್ಟು 4175 ನಿವೇಶನಗಳಿಗೆ ಹಕ್ಕುಪತ್ರಗಳನ್ನು ಹಂಚಿಕೆ ಮಾಡಲಾಗಿದೆ.

(ಊ) ಈಗಾಗಲೇ ಕಟ್ಟಲಾಗಿರುವ ಮನೆಗಳಿಗೆ ಅವಶ್ಯವಿರುವ ರಸ್ತೆ, ನೀರು ಹಾಗೂ ವಿದ್ಯುತ್ ಪೂರೈಸಲಾಗಿದೆಯೇ ?

1. ಕಲಬುರಗಿ ಜಿಲ್ಲೆಯ ತಾಲ್ಲೂಕು ಪಂಚಾಯಿತಿಗಳಲ್ಲಿ ಈಗಾಗಲೇ ನಿರ್ಮಿಸಲಾಗಿರುವ ಮನೆಗಳಿಗೆ ಅವಶ್ಯವಿರುವ ರಸ್ತೆ, ನೀರು ಹಾಗೂ ವಿದ್ಯುತ್ ಪೂರೈಸಲಾಗಿರುವ ವಿವರ ಕೆಳಕಂಡಂತಿದೆ.

| ಕ್ರ ಸಂ | ತಾಲ್ಲೂಕು | ಈಗಾಗಲೇ ಕಟ್ಟಲಾಗಿರುವ ಮನೆಗಳಿಗೆ ಅವಶ್ಯವಿರುವ ರಸ್ತೆ, ನೀರು ಹಾಗೂ ವಿದ್ಯುತ್ ಪೂರೈಸಲಾಗಿರುವ ಮಾಹಿತಿ |
|---|---|---|
| 1 | ಅಫ್ಜಲ್‌ಪುರ | ರಸ್ತೆಯನ್ನು ನಿರ್ಮಿಸಲಾಗಿದ್ದು, ನೀರು ಹಾಗೂ ವಿದ್ಯುತ್ ಪ್ರಗತಿ ಹಂತದಲ್ಲಿರುತ್ತದೆ. |
| 2 | ಅಳಂದ | |
| 3 | ಚಿಂಚೋಳಿ | |
| 4 | ಚಿತ್ತಾಪುರ | |
| 5 | ಜೇವರ್ಗಿ | |
| 6 | ಕಲಬುರಗಿ | |
| 7 | ಕಲಗಿ | |
| 8 | ಕಮಲಾಪುರ | |
| 9 | ಸೇಡಂ | |
| 10 | ಶಹಾಬಾದ | |
| 11 | ಯಡ್ರಾಮಿ | |

2. ಶಹಾಬಾದ್ ನಗರಸಭೆಯಿಂದ, ಅಫ್ಜಲ್‌ಪುರ ಪಟ್ಟಣ

| | | |
|---|---|---|
| | | ಪಂಚಾಯಿತಿ, ಜೇವರ್ಗಿ ಪಟ್ಟಣ ಪಂಚಾಯಿತಿ, ಸೇಡಂ ಪುರಸಭೆ ವತಿಯಿಂದ, ಆಳಂದ ಪುರಸಭೆ ವತಿಯಿಂದ, ಮೂಲಭೂತ ಸೌಕರ್ಯ ಕಲ್ಪಿಸಿರುವುದಿಲ್ಲ.<br>3. ಚಿಂಚೋಳಿ ಪಟ್ಟಣ ಪಂಚಾಯಿತಿ ಹಾಗೂ ಚಿತ್ತಾಪುರ ಪುರಸಭೆ ನಿವೇಶನ ಅಭಿವೃದ್ಧಿಯಾಗದಿರುವುದರಿಂದ ಮೂಲಭೂತ ಸೌಕರ್ಯ ಕಲ್ಪಿಸಿರುವುದಿಲ್ಲ.<br>4. ವಾಡಿ ಪುರಸಭೆವತಿಯಿಂದ ನಿವೇಶನ ರಚನೆಯಾಗಿದ್ದು, ಮನೆಗಳ ಕಟ್ಟಡ ನಿರ್ಮಾಣ ಪ್ರಾರಂಭವಾಗಿರುವುದಿಲ್ಲ. ಕುಡಿಯುವ ನೀರಿನ ಟ್ಯಾಂಕ್ ನಿರ್ಮಿಸಿದ್ದು, ರಸ್ತೆ & ವಿದ್ಯುತ್ ಸಂಪರ್ಕ ಕಲ್ಪಿಸಲಾಗುವುದು.<br>5. ಕಲಬುರಗಿ ಮಹಾನಗರ ಪಾಲಿಕೆಯಲ್ಲಿ ಕೆಸರಟಗಿ ಸ.ನಂ. 27 & 28 ರಲ್ಲಿ ನಿರ್ಮಿಸಲಾದ ಮನೆಗಳಿಗೆ ಮೂಲಭೂತ ಸೌಕರ್ಯ ಪೂರೈಸಲಾಗಿದೆ ಮತ್ತು ಪಲ್ಲಾಪೂರ ಹಾಗೂ ಜಾಫರಬಾದರಲ್ಲಿ ನಿರ್ಮಿಸಲಾದ ಮನೆಗಳಿಗೆ 599 ಮನೆಗಳಿಗೆ ಮೂಲಭೂತ ಸೌಕರ್ಯ ಒದಗಿಸುವ ಕಾರ್ಯ ಪ್ರಗತಿಯಲ್ಲಿರುತ್ತದೆ. |

ಸಂಖ್ಯೆ :ವಇ 342 ಹೆಚ್‌ಎಂ 2021

(ವಿ. ಸೋಮಣ್ಣ)
ವಸತಿ ಮತ್ತು ಮೂಲಸೌಲಭ್ಯ
ಅಭಿವೃದ್ಧಿ ಸಚಿವರು